DFA/529067

## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 744
2. ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು)
3. ಉತ್ತರಿಸುವ ಸಚಿವರು : ತೋಟಗಾರಿಕೆ ಮತ್ತು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.
4. ಉತ್ತರಿಸಬೇಕಾದ ದಿನಾಂಕ : 17.09.2021

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಜಿಲ್ಲೆಯ ತೋಟಗಾರಿಕೆ ಮಹಾವಿದ್ಯಾಲಯಕ್ಕೆ ರೇಷ್ಮೆ ಇಲಾಖೆಯಿಂದ ಕೋಲಾರ(ಕೆ) ಸರ್ವೆ ನಂ.287/1 ರಲ್ಲಿ 49 ಎಕರೆ 23 ಗುಂಟೆ ಭೂಮಿ ನೀಡಲಾಗಿದೆಯೇ; (ವಿವರ ನೀಡುವುದು) | ಹೌದು.<br>ಜಿಲ್ಲೆಯ ತೋಟಗಾರಿಕೆ ಮಹಾವಿದ್ಯಾಲಯಕ್ಕೆ ರೇಷ್ಮೆ ಇಲಾಖೆಯ ಸರ್ವೆ ನಂ.287/1 ರಲ್ಲಿ 49 ಎಕರೆ 23 ಗುಂಟೆ ಭೂಮಿಯನ್ನು ದಿನಾಂಕ 07.01.2021 ರಂದು ಸರ್ಕಾರದಿಂದ ಮಂಜೂರು ಮಾಡಲಾಗಿದೆ.<br>(ಸರ್ಕಾರದ ಆದೇಶ ಸಂಖ್ಯೆ:ರೇಷ್ಮೆ 91 ರೇಕೃವಿ 2020, ಬೆಂಗಳೂರು, ದಿನಾಂಕ:07.01.2021) ಮತ್ತು ರೇಷ್ಮೆ ಇಲಾಖೆಯಿಂದ ಮಹಾವಿದ್ಯಾಲಯಕ್ಕೆ ದಿನಾಂಕ:11.02.2021 ರಂದು ಹಸ್ತಾಂತರಿಸಲಾಗಿದೆ. |
| ಆ | ನೀಡಿದಲ್ಲಿ, ಆ ಭೂಮಿಯಲ್ಲಿ ಮಹಾವಿದ್ಯಾಲಯಕ್ಕೆ ಬೇಕಾಗಿರುವ ಕಟ್ಟಡ ನಿರ್ಮಾಣ / ಉಪಯೋಗ ಮಾಡಲಾಗುತ್ತಿದೆಯೇ? ಇಲ್ಲವಾದಲ್ಲಿ ಅದಕ್ಕೆ ಕಾರಣವೇನು; | ಆ ಭೂಮಿಯನ್ನು ಅಭಿವೃದ್ಧಿಪಡಿಸಲು ಅದಕ್ಕೆ ಬೇಕಾಗಿರುವ ಸೌಲಭ್ಯಗಳಾದ ತಂತಿಬೇಲಿ, ಗಿಡಗಂಟಿಗಳನ್ನು ಶುಚಿಗೊಳಿಸುವುದು, ಬದು ನಿರ್ಮಾಣ, ಗುಂಡಿ ಮತ್ತು ಮಣ್ಣು ಹಾಕುವುದು, ನೀರಿನ ವ್ಯವಸ್ಥೆಗಾಗಿ ಈಗಿರುವಂತಹ ಎರಡು ಕೊಳವೆ ಬಾವಿಗಳನ್ನು ದುರಸ್ತಿ ಮಾಡಿಕೊಳ್ಳಲಾಗುತ್ತಿದೆ. ಈಗಿರುವ ರೇಷ್ಮೆ ಇಲಾಖೆಯ ಮುಖ್ಯ ಕಟ್ಟಡದಲ್ಲಿ ಕ್ಷೇತ್ರ ಪ್ರಭಾರಿ ಅಧಿಕಾರಿಯ ಕಛೇರಿ ಸಲುವಾಗಿ ಒಂದು ಕೋಣೆಯನ್ನು ಉಪಯೋಗಿಸಲಾಗುತ್ತಿದೆ. ಅಲ್ಲಿರುವ ವಸತಿ ಗೃಹಗಳನ್ನು ದುರಸ್ತಿ ಮಾಡಿಸಿ ಮುಂದಿನ ತೋಟಗಾರಿಕೆ ಮಹಾವಿದ್ಯಾಲಯದ ಚಟುವಟಿಕೆಗಳಿಗಾಗಿ ಉಪಯೋಗಿಸಲಾಗುತ್ತದೆ. |
| ಇ | ಮಹಾವಿದ್ಯಾಲಯಕ್ಕೆ ಬೇಕಾಗಿರುವ ಸುಮಾರು 50 ಎಕರೆ ಜಾಗ ಹಸ್ತಾಂತರಿಸಿಕೊಳ್ಳದಿದ್ದರೆ ICAR ನವದೆಹಲಿಯವರು ಮಹಾವಿದ್ಯಾಲಯ ರದ್ದುಗೊಳಿಸುವ ಎಚ್ಚರಿಕೆ ನೀಡಿದ್ದು, ಸರ್ಕಾರದ ಗಮನಕ್ಕಿದೆಯೇ; | ಭೂಮಿಯನ್ನು ಹಸ್ತಾಂತರ ಮಾಡಿಕೊಂಡಿರುವುದರಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |
| ಈ | ಇದ್ದರೆ, ಈ ಭೂಮಿಯನ್ನು ಮಹಾವಿದ್ಯಾಲಯ ಉಪಯೋಗಿಸಿಕೊಳ್ಳುವುದು ಯಾವಾಗ, ಭೂಮಿ ಹಸ್ತಾಂತರ ಮಾಡಿಕೊಳ್ಳದಿದ್ದರೆ ಕಾಲೇಜು ರದ್ದತಿಗೆ ಸರ್ಕಾರವೆ ನೇರ ಹೊಣೆಯಾಗುತ್ತದೆಂಬ ವಿಷಯ ಸರ್ಕಾರದ ಗಮನಕ್ಕೆಯಿದೆಯೇ? | |

**No.HORTI 381 HGM 2021**

(ಮುನಿರತ್ನ)
ತೋಟಗಾರಿಕೆ ಮತ್ತು ಯೋಜನೆ, ಕಾರ್ಯಕ್ರಮ
ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.